## ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1171
ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ.ರಾಥೋಡ್ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವ ದಿನಾಂಕ : 23.12.2021
ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕೃಷ್ಣಾ ಮೇಲ್ದಂಡೆ ಯೋಜನೆಯ ಭೂಸ್ವಾಧೀನ ಹಾಗೂ ಪುನರ್ ವಸತಿ, ಪುನರ್ ನಿರ್ಮಾಣಕ್ಕೆ ಪ್ರಸ್ತುತ ಸಾಲಿನಲ್ಲಿ ಎಷ್ಟು ಅನುದಾನವನ್ನು ನೀಡಲು ನಿರ್ಧರಿಸಲಾಗಿದೆ; (ವಿವರ ನೀಡುವುದು) | ಕೃಷ್ಣಾ ಮೇಲ್ದಂಡೆ ಯೋಜನೆಯ ಭೂಸ್ವಾಧೀನ ಹಾಗೂ ಪುನರ್ ವಸತಿ, ಪುನರ್ ನಿರ್ಮಾಣಕ್ಕೆ ಪ್ರಸ್ತುತ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ಪರಿಷ್ಕೃತ ಅನುದಾನದ ವಿವರಗಳು ಈ ಕೆಳಗಿನಂತಿದೆ :<br>(1) ಭೂಸ್ವಾಧೀನ ಹಾಗೂ ಪು & ಪು. (ಬಂಡವಾಳ ಅಡಿಯಲ್ಲಿ) : ರೂ.730.00 ಕೋಟಿ<br>(2) ಭೂಸ್ವಾಧೀನ ಹಾಗೂ ಪು & ಪು. (ಎಸ್.ಸಿ.ಪಿ ಅಡಿಯಲ್ಲಿ) : ರೂ.160.00 ಕೋಟಿ<br>(3) ಭೂಸ್ವಾಧೀನ ಹಾಗೂ ಪು & ಪು. (ಎಸ್.ಸಿ.ಪಿ ಅಡಿಯಲ್ಲಿ) : ರೂ. 80.00 ಕೋಟಿ<br>**ಒಟ್ಟು : ರೂ.970.00 ಕೋಟಿ** |
| ಆ) | ಕೃಷ್ಣಾ ಮೇಲ್ದಂಡೆ ಯೋಜನೆಯನ್ನು ರಾಷ್ಟ್ರೀಯ ಯೋಜನೆಯನ್ನಾಗಿ ಮಾಡಲು ಇರುವ ತಕರಾರುಗಳೇನು; | ರಾಷ್ಟ್ರೀಯ ಯೋಜನೆ (National Project) ಪರಿಗಣನೆಗೆ ಕೇಂದ್ರ ಸರ್ಕಾರದ ಮಾರ್ಗಸೂಚಿರನ್ವಯ ಯೋಜನೆಯ ಪ್ರಸ್ತಾವನೆಗೆ ಸಕ್ಷಮ ಪ್ರಾಧಿಕಾರಗಳ ಅಗತ್ಯ ತಿರುವಳಿಗಳು ಮತ್ತು ಕೃಷ್ಣಾ ನ್ಯಾಯಾಧಿಕರಣ-2ರ ಗೆಜೆಟ್ ಅಧಿಸೂಚನೆ ಅವಶ್ಯಕವಿರುತ್ತದೆ.<br>ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3 ರ ಯೋಜನೆಗಾಗಿ ಕೃಷ್ಣಾ ನ್ಯಾಯಾಧಿಕರಣ-2ರ ತೀರ್ಪಿನಡಿ 130 ಟಿ.ಎಂ.ಸಿ. ನೀರಿನ ಹಂಚಿಕೆ ಆಗಿದ್ದು, ಸದರಿ ನೀರಿನ ಬಳಕೆಯು ಕೃಷ್ಣಾ ನ್ಯಾಯಾಧೀಕರಣ-2 ರ ತೀರ್ಪಿನ ಗೆಜೆಟ್ ಅಧಿಸೂಚನೆಗೆ ಒಳಪಟ್ಟಿರುತ್ತದೆ. ಸದರಿ ನ್ಯಾಯಾಧಿಕರಣದ ಅಂತಿಮ ತೀರ್ಪು ಇನ್ನೂ ಕೇಂದ್ರ ಸರ್ಕಾರದಿಂದ ಗೆಜೆಟ್ ಅಧಿಸೂಚನೆ ಆಗಬೇಕಿರುತ್ತದೆ.<br>ಗೆಜೆಟ್ ಪ್ರಕಟಣೆ ಸಂಬಂಧ ಮಾನ್ಯ ಸರ್ವೋಚ್ಚ ನ್ಯಾಯಾಲಯಕ್ಕೆ ಅನುಮತಿ ಕೋರಿ ಸೂಕ್ತ Affidavit / Application ಸಲ್ಲಿಸಲು ಕೇಂದ್ರ ಸರ್ಕಾರವನ್ನು ಕೋರಲಾಗಿದೆ.<br>ಕೇಂದ್ರ ಸರ್ಕಾರದ ಅಧಿಸೂಚನೆ ಬಾಕಿ ಇರಿಸಿ ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರ ರೂ.51,148.94 ಕೋಟಿ ಪರಿಷ್ಕೃತ ಅಂದಾಜು ಮೊತ್ತದ ವಿವರವಾದ ಯೋಜನಾ ವರದಿಯನ್ನು ಕೇಂದ್ರ ಜಲ ಆಯೋಗಕ್ಕೆ (CWC) ದಿನಾಂಕ:12.11.2020 ರಲ್ಲಿ ಅಗತ್ಯ ಪೂರ್ವಬಾವಿ ಪರಿಶೀಲನೆಗಾಗಿ (appraisal) ಸಲ್ಲಿಸಲಾಗಿದ್ದು, ಸದರಿ ಕಾರ್ಯವನ್ನು ಕೈಗೆತ್ತಿಕೊಂಡು ಯೋಜನೆಯನ್ನು ಪೂರ್ಣಗೊಳಿಸಲು ಅನುವಾಗುವಂತೆ ರಾಷ್ಟ್ರೀಯ ಯೋಜನೆ (National Project) ಎಂದು ಘೋಷಿಸಲು ಈಗಾಗಲೇ ಕೇಂದ್ರ ಸರ್ಕಾರವನ್ನು ಕೋರಲಾಗಿದೆ. |
| ಇ) | ಯಾವ ಯಾವ ಇಲಾಖೆಗಳಿಂದ ರಾಷ್ಟ್ರೀಯ ಯೋಜನೆಗೆ ಅನುಮತಿ ಪಡೆಯಲಾಗಿದೆ? (ಸಂಪೂರ್ಣ ವಿವರ ನೀಡುವುದು) | |

ಸಂಖ್ಯೆ:ಜಸಂಇ 145 ಡಬ್ಲ್ಯೂಬಿಎಂ 2021

(ಗೋವಿಂದ ಎಂ.ಕಾರಜೋಳ)
ಜಲ ಸಂಪನ್ಮೂಲ ಸಚಿವರು